CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಫೆಬ್ರವರಿ ೩, ೨೦೦೫ (ಮಾಘ ೧೪, ಶಕ ವರ್ಷ ೧೯೨೬) | ಸಂಚಿಕೆ ೫ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ**

**ಜಂಟಿ ನಿರ್ದೇಶಕರವರ ಕಛೇರಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು**

**ಟೆಂಡರ್ ಪ್ರಕಟಣೆ ಸಂಖ್ಯೆ: ಜಿಕೈಕೇ:ಚಿಮ:ಅನುಪಯುಕ್ತ:ಎ2:13:2004-05, ದಿನಾಂಕ: 25ನೇ ಜನವರಿ 2005**

**ವಿಷಯ:** 2003-04ನೇ ಸಾಲಿನ ಅಂತ್ಯಕ್ಕೆ ಕಛೇರಿಯ ಅನುಪಯುಕ್ತ ವಸ್ತುಗಳನ್ನು ವಿಲೇವಾರಿ ಮಾಡಲು ಬಹಿರಂಗ ಹರಾಜು ಕುರಿತು.

**ಉಲ್ಲೇಖ:** 1) ಅಧಿಕ ನಿರ್ದೇಶಕರು (ಜಿಕೈಕೇ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಕಛೇರಿ ಆದೇಶ ಸಂಖ್ಯೆ:ಜಿಕೈಕೇ:ಅಪವಿ:8:2003-04, ದಿನಾಂಕ: 24.11.2004.

2) ಈ ಕಛೇರಿಯ ಪತ್ರ ಸಮ ಸಂಖ್ಯೆ: ದಿನಾಂಕ: 10.12.2004.

ಜಿಲ್ಲಾ ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು ಕಛೇರಿಯಲ್ಲಿನ ದಾಸ್ತಾನಿನಲ್ಲಿ ರೂ.22,359-00 ಮೊತ್ತದ ಅನುಪಯುಕ್ತ ವಸ್ತು : ಪೀಠೋಪಕರಣಗಳು ಒಂದು ಕಡೆ ದಾಸ್ತಾನು ಮಾಡಲಾಗಿದ್ದು, ಇವುಗಳನ್ನು ಬಹಿರಂಗ ಹರಾಜು ಮೂಲಕ ದಿನಾಂಕ: 21.01.2005 ರಂದು ಬೆಳಿಗ್ಗೆ 11.00 ಗಂಟೆಗೆ (ಅಂದಾಜು) ಕಛೇರಿ ಆವರಣದಲ್ಲಿ ನಡೆಸಲು ಉದ್ದೇಶಿಸಲಾಗಿತ್ತು. ಆದರೆ ಯಾವುದೇ ಬಿಡ್ಡುದಾರರು ಸದರಿ ದಿನಾಂಕದಂದು ಭಾಗವಹಿಸದೇ ಇದ್ದುದರಿಂದ ಹರಾಜಿನ ದಿನಾಂಕವನ್ನು 03.03.2005 ರಂದು, ಬೆಳಿಗ್ಗೆ 11.00 ಗಂಟೆಗೆ ಮುಂದೂಡಲಾಗಿದೆ. ಹಾಗೂ ಹರಾಜು ಮಾಡಲು ತೀರ್ಮಾನಿಸಲಾಗಿದೆ.

ಸದರಿ ಐಟಂಗಳ ವಿವರಗಳು ಈ ಕೆಳಗಿನಂತಿವೆ.

| ಕ್ರಮ ಸಂಖ್ಯೆ | ದಾಸ್ತಾನು ವಸ್ತುಗಳ ವಿವರ | ಪರಿಮಾಣ ತೂಕ |
|---|---|---|
| 1) | ಸ್ಕ್ರೀನ್ ವುಡನ್ ಫ್ರೇಂ | 03 ನಂ. |
| 2) | ಪ್ಲಾಸ್ಟಿಕ್ ಟ್ರೇಸ್ | 02 ನಂ. |
| 3) | ಓಎಸ್‌ಟಿ ಪದರ ಹಲಗೆ:ನಾಮಫಲಕ | 01 ನಂ. |
| 4) | ಪ್ಲೈವುಡ್ ಬೋರ್ಡ್ | 01 ನಂ. |
| 5) | ಓರಿಯಂಟಲ್ ಟೇಬಲ್ ಫ್ಯಾನ್ | 01 ನಂ. |
| 6) | ಪ್ಲೈವುಡ್ ಬೋರ್ಡು | 01 ನಂ. |
| 7) | - " - | 03 ನಂ. |
| 8) | - " - | 01 ನಂ. |
| 9) | ಟೇಬಲ್ ಕಾಲಿಂಗ್ ಬೆಲ್ | 02 ನಂ. |
| 10) | 'ಎಲ್' ಮಾದರಿ ಅಧಿಕಾರಿ ಮೇಜು | 01 ನಂ. |
| 11) | ಬೀಗ ಕಾರ್‌ಗಡ್ | 01 ನಂ. |
| 12) | ಕಾಲಿಂಗ್ ಬೆಲ್ | 02 ನಂ. |
| 13) | ಪ್ಲಾಸ್ಟಿಕ್ ಮಗ್ | 01 ನಂ. |
| 14) | ಪ್ಲಾಸ್ಟಿಕ್ ಬಕೆಟ್ | 01 ನಂ. |
| 15) | ಕಾಲಿಂಗ್ ಬೆಲ್ | 01 ನಂ. |

| ಕ್ರಮ ಸಂಖ್ಯೆ | ದಾಸ್ತಾನು ವಸ್ತುಗಳ ವಿವರ | ಪರಿಮಾಣ ತೂಕ |
|---|---|---|
| 16) | ಕ್ಯಾಲ್ಕ್ಯುಲೇಟರ್ಸ್ | 07 ನಂ. |
| 17) | ಇಂಟಿಮೊಕಾನ್ ಮೊದರುಗಳು | 03 ನಂ. |
| 18) | 8. ಪಿ.ಸಿ. ಮೋಡೆಂ | 01 ನಂ. |
| 19) | ಪ್ಲಾಸ್ಟಿಕ್ ಬಕೆಟ್ | 02 ನಂ. |
| 20) | ಪ್ಲಾಸ್ಟಿಕ್ ಮಗ್ | 02 ನಂ. |
| 21) | ಪ್ಲಾಸ್ಟಿಕ್ ಬಕೆಟ್ | 02 ನಂ. |
| 22) | ಕಾಲಿಂಗ್ ಬೆಲ್ | 01 ನಂ. |
| 23) | ಕ್ಯಾಲ್ಕ್ಯುಲೇಟರ್ | 02 ನಂ. |

ಟೆಂಡರ್ ಮತ್ತು ಹರಾಜಿನ ಷರತ್ತುಗಳು ಈ ಕೆಳಗಿನಂತಿವೆ.

1. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು ರೂ.2300-00 (ಎರಡು ಸಾವಿರದ ಮುನ್ನೂರು ಇ.ಎಂ.ಡಿ. ಮುಂಗಡ ಠೇವಣಿ ಇಡಬೇಕಾಗುತ್ತದೆ).
2. ಷೆಡ್ಯೂಲ್‌ನಲ್ಲಿ ಸೂಚಿಸಿರುವ ನಿಗದಿತ ಸಮಯ ಮತ್ತು ದಿನಾಂಕದಲ್ಲಿ ಬಹಿರಂಗ ಹರಾಜನ್ನು ನಡೆಸಲಾಗುವುದು.
3. ಹರಾಜಿನಲ್ಲಿ ಭಾಗವಹಿಸುವ ಮೊದಲು ಷೆಡ್ಯೂಲ್‌ನಲ್ಲಿ ನಮೂದಿಸಿರುವ ಇಡುಗಂಟನ್ನು (ಇಎಂಡಿ) ನಗದುರೂಪದಲ್ಲಿ ಪಾವತಿಸತಕ್ಕದ್ದು.
4. ಇಡುಗಂಟನ್ನು ಜಮಾ ಮಾಡದೇ ಬಿಡ್ಡುದಾರರು ಹರಾಜಿನಲ್ಲಿ ಭಾಗವಹಿಸುವ ಹಕ್ಕು ಇರುವುದಿಲ್ಲ.
5. ಷೆಡ್ಯೂಲ್‌ನಲ್ಲಿ ಸೂಚಿಸಿರುವ ಐಟಂಗಳನ್ನು ಪರಿಶೀಲಿಸಿ ಖಚಿತಪಡಿಸಿಕೊಂಡ ನಂತರ ಹರಾಜಿನಲ್ಲಿ ಭಾಗವಹಿಸಬೇಕು.
6. ಯಶಸ್ವಿ ಬಿಡ್‌ದಾರರು ತಮ್ಮ ಸ್ವತಃ ಖರ್ಚಿನಲ್ಲಿ ವಿಲೇವಾರಿ ಮಾಡಿಕೊಳ್ಳತಕ್ಕದ್ದು.
7. ಯಾವುದೇ ಕಾರಣಗಳನ್ನು ನಿಡದೇ ಟೆಂಡರ್‌ಗಳನ್ನು ತಿರಸ್ಕರಿಸುವ ಅಥವಾ ಒಪ್ಪಿಕೊಳ್ಳುವ ಅಧಿಕಾರ ಕೆಳಗೆ ಸಹಿ ಮಾಡಿರುವವರು ಕಾಯ್ದಿರಿಸಿ ಕೊಂಡಿರುತ್ತಾರೆ.

ಪಿ.ಆರ್. 67 ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಚಿಕ್ಕಮಗಳೂರು.

**IN THE COURT OF THE IV ADDL. CITY CIVIL JUDGE, MAYOHALL, BANGALORE**
**G & W.C.NO.15022/2004 HG 14.02.2005**

**PETITIONER:** 1. Mrs. Neelufor Nasreen. W/o Mr. Late G.S. Afzal Ahmed A/a 39 years
2. Ms. Hina Sultan D/o Mr. Late G.S. Afzal Ahmed, A/a 17 years.
3. Ms. Shagufta Firdaus D/o Mr. Late G.S. Afzal Ahmed, A/a 16 years
Petitioners No. 2 & 3 Represented by: Mother & natural Guardian Mrs Neelufor Nasreen, W/o Late G.S. Afzal Ahmed, A/a 39 years.
All the above residing at: No.8, Dispensary Road, Kalasipalyam, Bangalore-560001.

**V/S**

**RESPONDENT:** Nil

**PUBLIC NOTICE**

Notice is hereby given that a petition have been made to this court Under Section 8 of the Guardians and Wards Act prays for permission to sell the minor shares of **Ms. Hina Sultan & Ms. Shagufta Firdaus** born to Petitioner Smt. Mrs. Neelufor Nasreen.

The Court has fixed the date of hearing on 14.2.2005 of the said petition. All persons claiming to have any interest may come and see the proceedings before granting permission to sell Schedule Property.

**SCHEDULE PROPERTY**

All Piece and parcel of immovable property being the ground floor forming part of the premises now known as and bearing Corporation No.26/1, situated in Malavalli Rama Rao Lane, in Corporation Ward No.4747, Bangalore bounded on the:

East by : Property belonging to Mrs. Manoharavathi Agarwal
West by : Private Property
North by : Malavalli Rama Rao Lane
South by : Portion Allotted to G.S. Mustaq Ahmed.

Given under my hand and the seal of the Court this the 11th January 2005.

By Order of the Court,

PD-21 Asst. Registrar, City Civil Court, Mayohall Unit, Bangalore.

**ನಿರ್ದೇಶಕರ ಕಛೇರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, ಅರಮನೆ ರಸ್ತೆ, ಬೆಂಗಳೂರು**

**ಭಾಷಾ ಪಠ್ಯಪುಸ್ತಕಗಳ ಮುದ್ರಣಕ್ಕಾಗಿ ಟೆಂಡರ್**

**ಸಂಖ್ಯೆ: ಪಪೂಶಿಇ:ಪಠ್ಯಪುಸ್ತಕ ಮುದ್ರಣ:2005, ದಿನಾಂಕ: 28ನೇ ಜನವರಿ 2005**

2005-06ನೇ ಸಾಲಿನಲ್ಲಿ ಪ್ರಥಮ ಹಾಗೂ ದ್ವಿತೀಯ ಪದವಿ ಪೂರ್ವ ತರಗತಿಗಳ ಮಾರಾಟ ವಿಭಾಗದ ಸರ್ಕಾರಿ ಭಾಷಾ ಪುಸ್ತಕಗಳನ್ನು ಮುದ್ರಿಸಿ ಪ್ರಕಾಶಿಸಿ ಸರಬರಾಜು ಮಾಡಲು ಕರ್ನಾಟಕ ರಾಜ್ಯದಲ್ಲಿ ಅಧಿಕೃತವಾಗಿ ನೋಂದಾಯಿಸಲ್ಪಟ್ಟ ಅರ್ಹ ಮುದ್ರಕರು ಹಾಗೂ ಸ್ವಂತ ಮುದ್ರಣ ಸೌಲಭ್ಯವುಳ್ಳ ಅರ್ಹ ಪ್ರಕಾಶಕರಿಂದ ಟೆಂಡರ್ ಕರೆಯಲಾಗಿದೆ. ಟೆಂಡರ್ ಅರ್ಜಿಗಳನ್ನು ದಿನಾಂಕ: 04.02.2005 ರಿಂದ 18.02.2005ರ ಪೂರ್ವಾಹ್ನ

11.00 ಗಂಟೆಯವರೆಗೆ ಕಛೇರಿ ಕೆಲಸ ದಿನಗಳಲ್ಲಿ ಮಾರಾಟ ಮಾಡಲಾಗುವುದು. ಪ್ರತಿ ಅರ್ಜಿ ಬೆಲೆ ರೂ.1,000+4% ಮಾರಾಟ ತೆರಿಗೆ (ರೂ. ಒಂದು ಸಾವಿರ ಮತ್ತು ಶೇಕಡ 4ರ ಮಾರಾಟ ತೆರಿಗೆ) ಆಗಿದ್ದು ನಿರ್ದೇಶಕರು ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಹೆಸರಿನ ಡಿ.ಡಿ. ಯೊಂದಿಗೆ ಪಡೆಯಬಹುದಾಗಿದೆ. ಭರ್ತಿ ಮಾಡಿದ ಅರ್ಜಿಗಳನ್ನು ದಿನಾಂಕ: 18.02.2005ರ ಅಪರಾಹ್ನ 1.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರ್ ಅಧಿಸೂಚನೆಯಲ್ಲಿ ತಿಳಿಸಿರುವಂತೆ ಸಂಸ್ಥೆಯ ಮಾಹಿತಿಯನ್ನು ಲಕೋಟೆ 1 ರಲ್ಲಿ ಮತ್ತು ದರಪಟ್ಟಿಯನ್ನು ಲಕೋಟೆ 2 ರಲ್ಲಿ ಸಲ್ಲಿಸತಕ್ಕದ್ದು. ಲಕೋಟೆ 1ನ್ನು ದಿನಾಂಕ: 18.02.2005ರ ಅಪರಾಹ್ನ 2.30 ಗಂಟೆಗೆ ಲಕೋಟೆ 2ನ್ನು ದಿನಾಂಕ: 25.02.2005ರ ಅಪರಾಹ್ನ 3.00 ಗಂಟೆಗೆ ತೆರೆಯಲಾಗುವುದು. ದಿನಾಂಕ: 14.02.2005ರ ಅಪರಾಹ್ನ 3.00 ಗಂಟೆಗೆ ಪದವಿ ಪೂರ್ವ ಶಿಕ್ಷಣ ನಿರ್ದೇಶಕರ ಕೊಠಡಿಯಲ್ಲಿ ಪ್ರಿಬಿಡ್ ಸಭೆಯನ್ನು ಏರ್ಪಡಿಸಲಾಗಿದೆ. ಹೆಚ್ಚಿನ ವಿಷಯವನ್ನು ನಿರ್ದೇಶನಾಲಯದಿಂದ ಪಡೆಯಬಹುದು.

ಪಿ.ಆರ್. 69     ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು.

**ಅರಣ್ಯ ಇಲಾಖೆ**

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಹಳಿಯಾಳ ವಿಭಾಗ, ಹಳಿಯಾಳ**

**ಸಂಕ್ಷಿಪ್ತ ಮರು ಟೆಂಡರ್-ಕಂ-ಸವಾಲಿನ ಪ್ರಕಟಣೆ**

**ಸಂಖ್ಯೆ: ಬಿ3/ಎಮ್ಎಫ್ಪಿ/ದಾಲಚಿನ್ನಿ/2004-05**

ಯಾವತ್ತೂ ಸಾರ್ವಜನಿಕರಿಗೆ ಈ ಮೂಲಕ ಜಾಹೀರ ಪಡಿಸುವುದೇನೆಂದರೆ, ಹಳಿಯಾಳ ವಿಭಾಗದಲ್ಲಿ ದಿನಾಂಕ: 1.7.2004 ರಿಂದ 31.5.2006ನೇ ಸಾಲಿಗೆ ದ್ವಿವಾರ್ಷಿಕ ಅವಧಿವರೆಗೆ ಈ ಕೆಳಗೆ ನಮೂದಿಸಿದ ಕಿರು ಅರಣ್ಯ ಉತ್ಪನ್ನವನ್ನು (ಗ್ರಾಮ ಅರಣ್ಯ ಸಮಿತಿ ಕ್ಷೇತ್ರಗಳನ್ನು ಹೊರತುಪಡಿಸಿ) ಸಂಗ್ರಹಿಸಿ ಪಡೆದುಕೊಳ್ಳುವ ಕುರಿತು ದಿನಾಂಕ: 15.02.2005 ರಂದು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಳಿಯಾಳ ವಿಭಾಗ, ಹಳಿಯಾಳ ರವರ ಕಾರ್ಯಾಲಯದಲ್ಲಿ ಮರು ಟೆಂಡರ್-ಕಂ-ಸವಾಲನ್ನು ಆಹ್ವಾನಿಸಲಾಗಿದೆ. ಸದರಿ ಟೆಂಡರ್-ಕಂ-ಸವಾಲನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಳಿಯಾಳ ವಿಭಾಗ, ಹಳಿಯಾಳ ಅಥವಾ ಅವರಿಂದ ಅಧಿಕಾರವನ್ನು ಪಡೆದಂತಹ ಅಧಿಕಾರಿಗಳು ಸದರಿ ದಿನಾಂಕದಂದು ನೇರವೇರಿಸುವುದು.

ವಿಲೇವಾರಿ ಮಾಡಲಾಗುವ ಕಿರು ಅರಣ್ಯ ಉತ್ಪನ್ನದ ವಿವರಗಳು:-

| ಘಟಕ ಸಂಖ್ಯೆ | ಕ್ಷೇತ್ರಗಳು | ಕಿರು ಅರಣ್ಯ ಉತ್ಪನ್ನದ ಹೆಸರು | ಟೆಂಡರ್ ಸ್ವೀಕರಿಸುವ ದಿನಾಂಕ ಮತ್ತು ವೇಳೆ | ಹರಾಜಿನ ವೇಳೆ ಮತ್ತು ಸ್ಥಳ |
|---|---|---|---|---|
| 1 | ಜಲಬೇಟ ವಲಯ ಕಾಮರಾ, ಅಸು ಶಾಖೆ | ದಾಲ್ಚಿನ್ನಿ ಎಲೆಗಳು | ದಿನಾಂಕ: 15.02.2005ರ ಬೆಳಿಗ್ಗೆ 10.30 ಘಂಟೆಯಿಂದ ಮಧ್ಯಾಹ್ನ 3.00 ಘಂಟೆಯವರೆಗೆ | ದಿನಾಂಕ: 15.02.2005ರ ಮಧ್ಯಾಹ್ನ 3.00 ಘಂಟೆಯ ನಂತರ ಮೊದಲು ಸವಾಲು ಮಾಡಲಾಗುವುದು ನಂತರ ಟೆಂಡರ್ ತೆರೆಯಲಾಗುವುದು. |
| 2 | ಜಲಬೇಟ ವಲಯ ಕುರಂದಿ, ಬಾಮನವಾಡಿ ಶಾಖೆ | ದಾಲ್ಚಿನ್ನಿ ಎಲೆಗಳು | -ಸದರ- | -ಸದರ- |
| 3 | ತಿನೈಘಾಟ ವಲಯ ಕ್ಯಾಸಲ್‌ರಾಕ, ಬಜಾರಕುನಂಗ ಶಾಖೆ | ದಾಲ್ಚಿನ್ನಿ ಎಲೆಗಳು | -ಸದರ- | -ಸದರ- |
| 4 | ತಿನೈಘಾಟ ವಲಯ ಅನಮೋಡ ಶಾಖೆ | ದಾಲ್ಚಿನ್ನಿ ಎಲೆಗಳು | -ಸದರ- | -ಸದರ- |
| 5 | ತಿನೈಘಾಟ ವಲಯ ಕರಂಬಾಳ ಶಾಖೆ | ದಾಲ್ಚಿನ್ನಿ ಎಲೆಗಳು | -ಸದರ- | -ಸದರ- |

**ಷರತ್ತುಗಳು:**

1. ಟೆಂಡರ್-ಕಂ-ಸವಾಲಿನಲ್ಲಿ ಭಾಗವಹಿಸಲು ಇಚ್ಛಿಸುವವರು 2004-05ನೇ ಸಾಲಿನಲ್ಲಿ ಅರಣ್ಯ ಗುತ್ತಿಗೆದಾರರೆಂದು ಈ ವೃತ್ತದ ಯಾವುದೇ ವಿಭಾಗದಲ್ಲಿ ತಮ್ಮ ಹೆಸರನ್ನು ನೋಂದಾಯಿಸಿದವರಾಗಿರಬೇಕು.
2. ಟೆಂಡರ್ ಫಾರಂಗಳನ್ನು ಈ ಕಾರ್ಯಾಲಯದಲ್ಲಿ ಟೆಂಡರ್ ದಿನದಂದು ಈ ಕಛೇರಿಯ ಗಡಿಯಾರದಂತೆ ಬೆಳಿಗ್ಗೆ 10.00 ರಿಂದ ಮಧ್ಯಾಹ್ನ 12.00 ಘಂಟೆಯವರೆಗೆ ಮಾತ್ರ ನೀಡಲಾಗುವುದು. ಪ್ರತಿ ಫಾರ್ಮಿನ ಬೆಲೆ ರೂ.500.00 ಹಾಗೂ ಚಾಲ್ತಿಯಲ್ಲಿದ್ದ ಕರಗಳನ್ನು ಪಾವತಿಸಿ ಪಡೆದುಕೊಳ್ಳಬಹುದು. ಫಾರಂನ್ನು ಇತರರಿಗೆ ಹಸ್ತಾಂತರಿಸಲು ಅಥವಾ ಅದರ ಮೌಲ್ಯವನ್ನು ತಿರುಗಿ ಕೊಡುವುದಕ್ಕೆ ಬರುವುದಿಲ್ಲ.
3. ಟೆಂಡರನ್ನು ಮೊಹರಬಂದ್ ಲಕೋಟೆಯ ಮೇಲೆ 2004-06ನೇ ಸಾಲಿನಲ್ಲಿ ದಾಲ್ಚಿನ್ನಿ ಎಲೆಗಳ ಕುರಿತಾಗಿ ಟೆಂಡರ್ ಎಂದು ನಮೂದಿಸಬೇಕು ಹಾಗೂ ದಿನಾಂಕ: 15.02.2005 ರಂದು ಈ ಕಛೇರಿಯಲ್ಲಿ ಇಟ್ಟಂತಹ ಟೆಂಡರ್ ಪೆಟ್ಟಿಗೆಯಲ್ಲಿ ಹಾಕಬೇಕು.
4. ದಿನಾಂಕ: 15.02.2005 ರಂದು ಮಧ್ಯಾಹ್ನ 3.00 ಘಂಟೆಯ ನಂತರ ಮೊದಲು ಟೆಂಡರ್ ತೆರೆಯಲಾಗುವುದು ನಂತರ ಸವಾಲನ್ನು ಮಾಡಲಾಗುವುದು.
5. ಟೆಂಡರ್ / ಸವಾಲಿನಲ್ಲಿ ಬಂದಂತಹ ಮೊತ್ತ ಯಾವುದು ಗರಿಷ್ಠವೋ ಅದನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು.
6. ಯಶಸ್ವಿ ಟೆಂಡರು / ಸವಾಲುದಾರರು ತಾವು ಖರೀದಿಸಿದ ಶೇಕಡಾ 50 ರಷ್ಟು ಹಣ ಹಾಗೂ ಪೂರ್ತಿ ಮೌಲ್ಯದ ಮೇಲೆ ಚಾಲ್ತಿಯಲ್ಲಿರುವ ಕರಗಳನ್ನು ಸವಾಲು ಮುಗಿದ ತಕ್ಷಣ ಈ ಕಾರ್ಯಾಲಯದಲ್ಲಿ ಭರಣ ಮಾಡಬೇಕು. ಇದಕ್ಕೆ ತಪ್ಪಿದಲ್ಲಿ ಗುತ್ತಿಗೆದಾರರು ಈ ಕಛೇರಿಯಲ್ಲಿ ಇಟ್ಟಂತಹ ಅಮಾನತು ಹಣವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಅಲ್ಲದೇ ಮೂಲ ಟೆಂಡರುದಾರರ ಜವಾಬ್ದಾರಿಯ ಮೇಲೆ ಮರು ಸವಾಲು ಮಾಡಲಾಗುವುದು. ಮರು ಸವಾಲಿನಲ್ಲಿ ಸರಕಾರಕ್ಕೆ ಯಾವುದೇ ಹಾನಿಯಾದಲ್ಲಿ ಸದರಿ ಹಾನಿಯನ್ನು ಮೂಲ ಸವಾಲು ದಾರರಿಂದ ಜಮೀನು ವಸೂಲಿ ಬಾಕಿಯಂತೆ ಅಥವಾ ದಿವಾಣಿ ನ್ಯಾಯಾಲಯದ ಡಿಕ್ರಿಯ ಮೂಲಕ ವಸೂಲು ಮಾಡಲಾಗುವುದು.
7. ಉಪ ಅರಣ್ಯ ಸಂರಕ್ಷಣಾಧಿಕಾರಿ, ಹಳಿಯಾಳ ವಿಭಾಗ, ಹಳಿಯಾಳ ರವರು ಟೆಂಡರ್ / ಸವಾಲು ಮಂಜೂರಿ ಅಥವಾ ನಾಮಂಜೂರಿ ಮಾಡುವ ಅಧಿಕಾರ ಹೊಂದಿರುತ್ತಾರೆ.

8. ಉಳಿದ ವಿವರವಾದ ಷರತ್ತುಗಳನ್ನು ತದ ನಂತರ ಪ್ರಕಟಿಸಲಾಗುವುದು.
9. ಸದರಿ ವಿಷಯದಲ್ಲಿ ಹೆಚ್ಚಿನ ಮಾಹಿತಿ ಬೇಕಾದಲ್ಲಿ ಈ ಕಾರ್ಯಾಲಯದ ಕೆಲಸದ ವೇಳೆಯಲ್ಲಿ ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ ಪಡೆದುಕೊಳ್ಳಬಹುದಾಗಿದೆ.

ರಾಮಚಂದ್ರ

ಪಿ.ಆರ್. 71 ಉಪ ಅರಣ್ಯ ಸಂರಕ್ಷಣಾಧಿಕಾರಿ, ಹಳಿಯಾಳ ವಿಭಾಗ, ಹಳಿಯಾಳ.

## ಕಾರಾಗೃಹಗಳ ಇಲಾಖೆ

## ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರ ಕಛೇರಿ, ನಂ.4, ಶೇಷಾದ್ರಿ ರಸ್ತೆ, ಬೆಂಗಳೂರು-560 009

### ಅಧಿಸೂಚನೆ ಸಂಖ್ಯೆ: ಇ4:ಸಿಆರ್-19:2003, ದಿನಾಂಕ: 28ನೇ ಜನವರಿ 2005

ಕಾರಾಗೃಹಗಳ ಇಲಾಖೆಯಲ್ಲಿ ಖಾಲಿ ಇರುವ ದ್ವಿತೀಯ ದರ್ಜೆ ಬೋಧಕರ (ಇನ್ಸ್ಟ್ರಕ್ಟರ್ ಗ್ರೇಡ್-II) (ಹೊಲಿಗೆ) ವೃಂದದಲ್ಲಿನ ಒಂದು ಬ್ಯಾಕ್‌ಲಾಗ್ ಹುದ್ದೆಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21.11.2001 ರನ್ವಯ ತುಂಬಲು ಈ ಕಾರ್ಯಾಲಯದ ಅಧಿಸೂಚನೆ ಸಂಖ್ಯೆ: ಇ4/ಸಿಆರ್-19/ನೇಮಕಾತಿ/2003, ದಿನಾಂಕ: 30.5.2003ರ ಪ್ರಕಟಣೆ ಮೇರೆಗೆ ದ್ವಿತೀಯ ದರ್ಜೆ ಬೋಧಕರ (ಇನ್ಸ್ಟ್ರಕ್ಟರ್ ಗ್ರೇಡ್-II) ವೃಂದದ ಬ್ಯಾಕ್ ಲಾಗ್ ಹುದ್ದೆಗಳಿಗೆ ಆದ್ಯತೆ ಹಾಗೂ ವೃತ್ತಿ ಆಧಾರದನ್ವಯ ಪರಿಶಿಷ್ಟ ಪಂಗಡದ ಅಭ್ಯರ್ಥಿ ಶ್ರೀಮತಿ ಸುಜಾತ ಕೌಲಗಿ, ಇವರನ್ನು ಹಂಗಾಮಿಯಾಗಿ (ಪ್ರೊವಿಷನಲ್) ಮುಖ್ಯ ಪಟ್ಟಿಯಲ್ಲಿ ಈ ಕಛೇರಿ ಅಧಿಸೂಚನೆ ಸಂಖ್ಯೆ: ಇ4:ಸಿಆರ್-19:2003, ದಿನಾಂಕ: 26.9.2003 ರಲ್ಲಿ ಆಯ್ಕೆ ಮಾಡಲಾಗಿತ್ತು.

ನೇಮಕಾತಿ ಪೂರ್ವದಲ್ಲಿ ಅಭ್ಯರ್ಥಿಯ ಶೈಕ್ಷಣಿಕ ಹಾಗೂ ಮತ್ತಿತರ ಮೂಲ ದಾಖಲೆಗಳನ್ನು ಹಾಗೂ ಜಾತಿ ಪರಿಶೀಲನೆ ಬಗ್ಗೆ ಸಿಂಧುತ್ವವನ್ನು ಪರಿಶೀಲಿಸಬೇಕಾಗಿದ್ದರಿಂದ ಮೂಲ ದಾಖಲೆಗಳನ್ನು ಸಲ್ಲಿಸಲು ಸದರಿ ಅಭ್ಯರ್ಥಿಗೆ 4 ಬಾರಿ ನೋಂದಾಯಿತ ಅಂಚೆ ಸ್ವೀಕೃತಿ ಬಾಕಿಯಲ್ಲಿ ಹಿಂಬರಹಗಳನ್ನು ನೀಡಲಾಗಿದ್ದು, ಅವುಗಳನ್ನು ಸದರಿ ಅಭ್ಯರ್ಥಿಯು ಸ್ವೀಕರಿಸಿದ್ದರೂ ಸಹ, ಮೂಲ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ. ಅಭ್ಯರ್ಥಿಯ ಜಾತಿ ಪರಿಶೀಲಿಸಿ ಸಿಂಧುತ್ವ ಪ್ರಮಾಣ ಪತ್ರ ನೀಡುವಂತೆ ಬಿಜಾಪುರ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳನ್ನು ಕೋರಲಾಗಿತ್ತು. ಸದರಿ ಅಭ್ಯರ್ಥಿಯು ಅವಶ್ಯಕ ದಾಖಲೆಗಳನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಸಲ್ಲಿಸಿರುವುದಿಲ್ಲವೆಂದೂ, ಶ್ರೀಮತಿ ಸುಜಾತ ಕೌಲಗಿ ಇವರು ಈಗಾಗಲೇ ಆರೋಗ್ಯ ಇಲಾಖೆಯಲ್ಲಿ ಬಿ.ಹೆಚ್.ಇ.ಓ. ಹುದ್ದೆಯಲ್ಲಿ ಆಯ್ಕೆಯಾಗಿ ಸೇವೆ ಸಲ್ಲಿಸುತ್ತಿದ್ದಾರೆ, ಪ್ರಸ್ತುತ ಸದರಿಯವರು ಕಾರಾಗೃಹ ಇಲಾಖೆಯಲ್ಲಿ ಆಯ್ಕೆಯಾಗಿರುವ ದ್ವಿತೀಯ ದರ್ಜೆ ಬೋಧಕರ ಹುದ್ದೆಗೆ ಇಚ್ಛಿಯಿಲ್ಲ, ಅವರನ್ನು ಆ ಹುದ್ದೆಗೆ ಪರಿಗಣಿಸದಿರಲು ಕೋರಿರುವ ಅವರ ಲಿಖಿತ ಪತ್ರವನ್ನು ಲಗತ್ತಿಸಿ, ತಮ್ಮ ಪತ್ರ ಸಂಖ್ಯೆ: ಜಿಸಕ:ಸಿಂಧುತ್ವ:ಜಾತಿಪ:ಸಿಆರ್-1202:2004-05, ದಿನಾಂಕ: 15.12.2004 ರಲ್ಲಿ ವರದಿ ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ದ್ವಿತೀಯ ದರ್ಜೆ ಬೋಧಕರ ಹುದ್ದೆಗೆ ಮುಖ್ಯಪಟ್ಟಿಯಲ್ಲಿ ಆಯ್ಕೆಯಾಗಿರುವ ಪರಿಶಿಷ್ಟ ಪಂಗಡದ ಅಭ್ಯರ್ಥಿ ಶ್ರೀಮತಿ ಸುಜಾತ ಕೌಲಗಿ, ಇವರ ಆಯ್ಕೆಯನ್ನು ರದ್ದುಪಡಿಸಿದೆ.

ಪಿ.ಆರ್. 68 ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರ ಪರವಾಗಿ.

## ಜಲ ಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

### ಅಲ್ಪಾವಧಿ ಟೆಂಡರ್ ಪ್ರಕಟಣೆ

### ಸಂಖ್ಯೆ: ಬಿಡಿಯನ್-4 ಪಿ.ಬಿ.-4:ಟೆಂಡರು ಪ್ರಕಟಣೆ:2004-05/4138/11, ದಿನಾಂಕ: 24ನೇ ಜನವರಿ 2005

ಮೊಹರಾದ ಐಟಂವಾರು ಟೆಂಡರ್‌ಗಳನ್ನು ನಿಗದಿತ ನಮೂನೆಯಲ್ಲಿ ದ್ವಿಪ್ರತಿಗಳಲ್ಲಿ ಈ ಕೆಳಕಾಣಿಸಿರುವ ಕಾಮಗಾರಿಗಳಿಗೆ ನೋಂದಾಯಿಸಲ್ಪಟ್ಟಿರುವ ಅರ್ಹ ಗುತ್ತಿಗೆದಾರರಿಂದ ಕರ್ನಾಟಕ ರಾಜ್ಯಪಾಲರ ಪರವಾಗಿ ಕಾರ್ಯಪಾಲಕ ಇಂಜಿನಿಯರ್, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ ಇವರಿಂದ ಆಹ್ವಾನಿಸಲಾಗಿದೆ.

ತುಂಬಲಾದ ಟೆಂಡರ್‌ಗಳನ್ನು ದಿನಾಂಕ: 26.2.2005 ಸಂಜೆ 4.00 ಗಂಟೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು. ಹಾಗೂ ಟೆಂಡರ್‌ಗಳನ್ನು ಸಾಧ್ಯವಾದಲ್ಲಿ ಅದೇ ದಿನ ಸಂಜೆ 4.30 ಗಂಟೆಗೆ ಅಥವಾ ಇನ್ನಾವುದೇ ದಿನದಂದು ಕಛೇರಿಯಲ್ಲಿ ಹಾಜರಿರುವ ಟೆಂಡರ್‌ದಾರರ ಅಥವಾ ಇನ್ನಾವುದೇ ನೋಂದಾಯಿತ ಗುತ್ತಿಗೆದಾರರ ಸಮಕ್ಷಮದಲ್ಲಿ ತೆರೆಯಲಾಗುವುದು.

1. ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ: 24.2.2005 ಸಂಜೆ 5.30 ರವರೆಗೆ
2. ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: 25.2.2005
3. ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ : 26.2.2005
4. ಕೆಲಸವನ್ನು ಮುಗಿಸುವ ಅವಧಿ : ಆರು ತಿಂಗಳು (ಮಳೆಗಾಲವನ್ನು ಹೊರತುಪಡಿಸಿ)
5. ಟೆಂಡರ್ ಕರೆ : ನಾಲ್ಕನೇ ಕರೆ

ಹೆಚ್ಚಿನ ವಿವರಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು. ಟೆಂಡರ್‌ನಲ್ಲಿ ಸೂಚಿಸಿರುವ ದಿನಾಂಕಗಳು ರಜಾ ದಿನವೆಂದು ಘೋಷಿಸಲ್ಪಟ್ಟರೆ ಮುಂದಿನ ಕೆಲಸದ ದಿನವನ್ನು ಟೆಂಡರಿನಲ್ಲಿ ತಿಳಿಸಿದ ದಿನಾಂಕದ ಬದಲಾಗಿ ಪರಿಗಣಿಸಲಾಗುವುದು.

| ಕ್ರಮ ಸಂಖ್ಯೆ | ಕೆಲಸದ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ ರೂ.ಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ | ಟೆಂಡರ್ ಫಾರಂ ಬೆಲೆ (ತೆರಿಗೆಗಳು ಪ್ರತ್ಯೇಕ) ರೂ.ಗಳಲ್ಲಿ | ಗುತ್ತಿಗೆದಾರರ ದರ್ಜೆ |
|---|---|---|---|---|---|
| 1 | Construction of bridge across Tunga Left Bank canal at Ch 20.80 km near Laxmi Talkies in Shimoga city. | 14,87,910 | 22,325 | 1,500/- | Class II and above |

**ಸೂಚನೆಗಳು:**

1) ನಿಗದಿತ ಟೆಂಡರ್ ಫಾರಂನಲ್ಲಿ ಕಾಮಗಾರಿಯ ವಿವರಗಳನ್ನು ಮತ್ತು ಟೆಂಡರಿನ ಷರತ್ತುಗಳನ್ನು ಒದಗಿಸಲಾಗಿದೆ. ಟೆಂಡರುದಾರರು ಹಾಕುವಾಗ ಪಾಲಿಸಬೇಕಾಗಿರುವ ನಿಬಂಧನೆಗಳನ್ನು ಸಹ ಒದಗಿಸಲಾಗಿದೆ. ಅದರಂತೆ ಟೆಂಡರ್ ಹಾಕಬೇಕು. ಟೆಂಡರ್ ಫಾರಂ ಬೆಲೆಯ ಮೊತ್ತವನ್ನು ಹಿಂತಿರುಗಿಸಲಾಗುವುದಿಲ್ಲ.
2) ಇ.ಎಂ.ಡಿ. ಮೊತ್ತವನ್ನು ಕರ್ನಾಟಕ ಸರ್ಕಾರದ ಟ್ರಜರಿ ಚಲನ್ ಡಿಮ್ಯಾಂಡ್ ಡ್ರಾಫ್ಟ್ ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟ್ ರೂಪದಲ್ಲಿ ಸೂಚಿಸಿರುವ ಮೊತ್ತಕ್ಕೆ ಕಾರ್ಯಪಾಲಕ ಇಂಜಿನಿಯರ್, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ ಇವರ ಹೆಸರಿನಲ್ಲಿ ಪಾವತಿಸಿರಬೇಕು. ತಪ್ಪಿದಲ್ಲಿ ಅಂತಹ ಟೆಂಡರುಗಳನ್ನು ತಿರಸ್ಕರಿಸಲಾಗುವುದು.
3) ಯಾವುದೇ ನಿಬಂಧನೆಗಳನ್ನು ಒಳಗೊಂಡ ಟೆಂಡರುಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ.
4) ಠೇವಣಿ ಕ್ರಮಬದ್ಧತೆಯು (ವ್ಯಾಲಿಡಿಟಿಪೀರಿಯಡ್) ಒಂದು ನೂರಾ ಇಪ್ಪತ್ತು ದಿನಗಳ ಅವಧಿಯನ್ನು ಒಳಗೊಂಡಿರಬೇಕಾಗಿರುತ್ತದೆ.
5) ಇತ್ತೀಚಿನ ಸೇಲ್ ಟ್ಯಾಕ್ಸ್ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
6) ಟೆಂಡರನ್ನು ಯಾವುದೇ ಕಾರಣವಿಲ್ಲದೆ ಮುಂದೂಡುವ, ತಿರಸ್ಕರಿಸುವ ಅಧಿಕಾರವು ಕಾರ್ಯಪಾಲಕ ಅಭಿಯಂತರವರಿಗೆ ಇರುತ್ತದೆ.
7) ಇಲಾಖಾವತಿಯಿಂದ ಯಾವುದೇ ಕಾಮಗಾರಿ ನಿರ್ಮಾಣ ವಸ್ತುಗಳನ್ನು ವಿತರಿಸಲಾಗುವುದಿಲ್ಲ. ಗುತ್ತಿಗೆದಾರರೇ ಸ್ವಂತ ಏರ್ಪಾಟು ಮಾಡಿಕೊಳ್ಳತಕ್ಕದ್ದು.
8) ಜೇಷ್ಠತೆಯ ಆಧಾರದ ಮೇಲೆ ಗುತ್ತಿಗೆದಾರರ ವಿಪತ್ರಗಳನ್ನು ಪಾವತಿಸಲಾಗುವುದು.
9) ಖಾಲಿ ಟೆಂಡರ್ ಪುಸ್ತಕವನ್ನು ಖರೀದಿಸಿ ಕ್ರಮಬದ್ದವಾಗಿ ಟೆಂಡರ್ ಹಾಕದೇ ಇದ್ದ ಮತ್ತು ಮೂರು ಬಾರಿ ಪುನರಾವರ್ತನೆ ಮಾಡಿದ ಗುತ್ತಿಗೆದಾರರು ಮುಂದಿನ ಟೆಂಡರ್‌ಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
10) ಸೇತುವೆ ಕಾಮಗಾರಿಗಳನ್ನು ಕೈಗೊಂಡು ಪೂರ್ಣಗೊಳಿಸಿದಂತಹ ಗುತ್ತಿಗೆದಾರರಿಗೆ ಪ್ರಾಮುಖ್ಯತೆ ನೀಡಲಾಗುವುದು.

**ಎ. ಮಲ್ಲೇಗೌಡ**

ಪಿ.ಆರ್. 70 ಕಾರ್ಯಪಾಲಕ ಅಭಿಯಂತರು, ನಂ.4 ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

**ನಮೂನೆ - 1**

**(9ನೇ ನಿಯಮ ನೋಡಿ)**

**ಆಯುಕ್ತರ ಕಛೇರಿ, ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು-560 001**

**ಅಧಿಸೂಚನೆ**

ಮೆಟ್ರಿಕ್-ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಖನಗಾಂವ, ಗೋಕಾಕ್ ತಾಲ್ಲೂಕು, ಬೆಳಗಾಂ ಜಿಲ್ಲೆ, ಇಲ್ಲಿ ನಿಲಯ ಮೇಲ್ವಿಚಾರಕರಾಗಿ ಕೆಲಸ ಮಾಡುತ್ತಿರುವ **ಶ್ರೀ ಬಾಳಪ್ಪ ತಂದೆ ಅಡಿವೆಪ್ಪ ಹರಿಜನ** ರವರ ಹೆಸರನ್ನು **ಬಾಳಪ್ಪ ಅಡಿವೆಪ್ಪ ಮಾಲದಿನ್ನಿ** ಎಂದು ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಪಿ.ಡಿ. 13 ಆಯುಕ್ತರು, ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು.

**ಲೋಕಸೇವಾ ಆಯೋಗದ ಕಛೇರಿ, ಪಾರ್ಕ್‌ಹೌಸ್, ಬೆಂಗಳೂರು**

**ತಿದ್ದುಪಡಿ ಸಂಖ್ಯೆ: ಇಪ(1)3501/2004-05/ಪಿಎಸ್‌ಸಿ, ದಿನಾಂಕ: 22ನೇ ಜನವರಿ 2005**

ದಿನಾಂಕ: 23.11.2000ದ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)3493/2000-01/ಪಿಎಸ್‌ಸಿ ದಿನಾಂಕ: 13.10.2000 ರಲ್ಲಿ ಪ್ರಕಟಿಸಲಾಗಿರುವ 1999ನೇ ಸಾಲಿನ ಮೊದಲ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ಅದರಲ್ಲಿ ಕಾರವಾರ ಕೇಂದ್ರಕ್ಕೆ ಸಂಬಂಧಿಸಿದ 'ಅಪೆಂಡಿಕ್ಸ್-ಸಿ' ಯಡಿ ಅಕೌಂಟ್ಸ್ ಹೈಯರ್ ವಿಷಯದ ಪತ್ರಿಕೆ-2ರ ವಿಷಯದ ನೋಂದಣಿ ಸಂಖ್ಯೆ: 37593ನ್ನು ರದ್ದುಪಡಿಸಿ ಆ ಸಂಖ್ಯೆಯನ್ನು ಅದೇ ಕೇಂದ್ರಕ್ಕೆ ಸಂಬಂಧಿಸಿದಂತೆ ಅಪೆಂಡಿಕ್ಸ್-'ಎ' ಯಡಿ ಅಕೌಂಟ್ಸ್ ಹೈಯರ್ ವಿಷಯದ ಪ್ರಥಮ ದರ್ಜೆಯಡಿ ನೋಂದಣಿ ಸಂಖ್ಯೆ: 37867ರ ನಂತರ ಸೇರಿಸಿ ಓದಿಕೊಳ್ಳತಕ್ಕದ್ದು.

ಪಿ.ಆರ್. 73 ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ, ಧಾರವಾಡ ಜಿಲ್ಲೆ**

**ಬಹಿರಂಗ ಹರಾಜು ಪ್ರಕಟಣೆ ಸಂಖ್ಯೆ: ಇಎಕ್ಸ್‌ಇ:ಸಾ.ಬ.ಹ:01/2003-04, ದಿನಾಂಕ: 2ನೇ ಫೆಬ್ರವರಿ 2005**

**ವಿಷಯ:** ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ವಾಹನಗಳನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡುವ ಕುರಿತು.

ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ಈ ಕೆಳಕಂಡ ವಾಹನಗಳನ್ನು ಎಲ್ಲಿವೆಯೋ ಹೇಗಿವೆಯೋ ಯಥಾ ಸ್ಥಿತಿಯಲ್ಲಿ ಕೆಳಗೆ ಸೂಚಿಸಿರುವ ಷರತ್ತುಗಳ ಪ್ರಕಾರ **ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ, ನವನಗರ ಇವರ ಕಛೇರಿ ಆವರಣದಲ್ಲಿ ದಿನಾಂಕ: 04.03.2005 ರಂದು ಬೆಳಿಗ್ಗೆ 11.00 ಗಂಟೆಗೆ** ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಹರಾಜು ನಿರ್ವಹಣಾಧಿಕಾರಿಯನ್ನಾಗಿ ಅಬಕಾರಿ ಉಪ ಅಧೀಕ್ಷಕರು, ವಿಚಕ್ಷಕದಳ ಹುಬ್ಬಳ್ಳಿ ಇವರನ್ನು ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ವಾಹನಗಳ ವಿಧ | ವಾಹನಗಳ ನೋಂದಣಿ ಸಂಖ್ಯೆ |
|---|---|---|
| 1 | ಅಶೋಕ ಲೈಲ್ಯಾಂಡ್ ಲಾರಿ | ಕೆಎ:01:ಎ:1691 |
| 2 | ಟಾಟಾ ಲಾರಿ | ಕೆಎ:01:7540 |
| 3 | ಅಶೋಕ ಲೈಲ್ಯಾಂಡ್ ಲಾರಿ | ಸಿಸಿಎ:2413 |
| 4 | ಲಾರಿ | ಎಂಇಜಡ್:7430 |
| 5 | ಟ್ರಕ್ | ಸಿಟಿಡಬ್ಲ್ಯೂ:5052 |
| 6 | ಮೇಟಡೋರ್ ಎಫ್-307 | ಎಂಇಹೆಚ್:4041 |

| ಕ್ರಮ ಸಂಖ್ಯೆ | ವಾಹನಗಳ ವಿಧ | ವಾಹನಗಳ ನೋಂದಣಿ ಸಂಖ್ಯೆ |
|---|---|---|
| 7 | ಟಾಟಾ ಮೊಬೈಲ್ | ಕೆಎ:29:ಎಂ:828 |
| 8 | ಟಾಟಾ ಸೀಯಾರಾ | ಕೆಎ:03:ಎಂ:6377 |
| 9 | ಕಾಂಟೆಸ್ಸಾ ಕಾರ್ | ಸಿಎವೈ:6626 |
| 10 | ಮಾರುತಿ ಓಮಿನಿ | ಕೆಎ:25:ಎಂ:1395 |
| 11 | ಮಾರುತಿ ವ್ಯಾನ್ | ಕೆಎ:25:ಎಂ:7599 |
| 12 | ಮಾರುತಿ ಓಮಿನಿ | ಜಿಎ:02:ಎ:9039 |
| 13 | ಮಾರುತಿ ವ್ಯಾನ್ | ಸಿಕೆಎಲ್:4853 |
| 14 | ಮಾರುತಿ ವ್ಯಾನ್ | ಕೆಎ:05:ಎಂಎ:5793 |
| 15 | ಮಾರುತಿ 800 | ಎಂಹೆಚ್:02:ಎಂ:9074 |
| 16 | ಮಾರುತಿ 800 | ಎಂಎಫ್ಎ:5308 |
| 17 | ಫಿಯಟ್ ಕಾರ್ | ಎಂಜೆಜಿ:1625 |
| 18 | ಗೂಡ್ಸ್ ಆಟೋ ರಿಕ್ಷಾ | ಕೆಎ:25:ಎ:1471-72 |
| 19 | ಆಟೋ ರಿಕ್ಷಾ | ಕೆಎ:25:6917 |
| 20 | ಆಟೋ ರಿಕ್ಷಾ | ಕೆಎ:23:1122 |

ವಾಹನಗಳನ್ನು ನೋಡಬಯಸುವ ಸಾರ್ವಜನಿಕರು ಕಛೇರಿಯ ಸಮಯದಲ್ಲಿ ಮುಂಜಾನೆ 10.00 ಗಂಟೆಯಿಂದ ಸಾಯಂಕಾಲ 5.30 ಗಂಟೆಯೊಳಗಾಗಿ ನೋಡಬಹುದಾಗಿದೆ.

**ಷರತ್ತುಗಳು:**

1. ಅಬಕಾರಿ ಇಲಾಖೆಯ ಸಿಬ್ಬಂದಿ ಹರಾಜಿನಲ್ಲಿ ಪ್ರತ್ಯಕ್ಷ ಯಾ ಪರೋಕ್ಷವಾಗಿಯಾಗಲಿ ಭಾಗವಹಿಸುವಂತಿಲ್ಲ.
2. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಸಾರ್ವಜನಿಕರು ಮೇಲ್ಕಾಣಿಸಿದ ದಿನದಂದು ಬೆಳಿಗ್ಗೆ 9.30 ರಿಂದ 11.00 ಗಂಟೆ ಒಳಗಾಗಿ ಲಾರಿಗೆ ರೂ.25,000 ಮೆಟಡೋರ್ ಮತ್ತು ಕಾರ್ : ರಿಕ್ಷಾಗಳಿಗೆ ರೂ.15,000 ಗಳ ಮುಂಗಡ ಠೇವಣಿ ಇಟ್ಟು ರಶೀದಿ ಪಡೆಯತಕ್ಕದ್ದು.
3. ಯಶಸ್ವಿ ಸವಾಲುದಾರರ ಶೇಕಡಾ 25 ರಷ್ಟು ಹಣವನ್ನು ಹರಾಜಿನ ದಿನದಂದೆ ಪಾವತಿಸಿ ರಶೀದಿ ಪಡೆಯತಕ್ಕದ್ದು. ಇನ್ನುಳಿದ ಶೇಕಡಾ 75 ರಷ್ಟು ಹಣವನ್ನು ಸ್ಥಿರೀಕರಣ ಆದೇಶ ತಲುಪಿದ 03 ದಿನಗಳೊಳಗಾಗಿ ಪಾವತಿಸತಕ್ಕದ್ದು. ತಪ್ಪಿದಲ್ಲಿ ಶೇಕಡಾ 25 ರಷ್ಟು ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಅಧಿಕಾರ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಧಾರವಾಡ ಜಿಲ್ಲೆ ಇವರು ಹೊಂದಿರುತ್ತಾರೆ.
4. ಯಶಸ್ವಿ ಸವಾಲುದಾರರು ಚಾಲ್ತಿಯಲ್ಲಿರುವ ದರದಲ್ಲಿ ಮಾರಾಟ ತೆರಿಗೆ ಹಾಗೂ ಇತರೆ ಕರಗಳನ್ನು ಪಾವತಿ ಮಾಡತಕ್ಕದ್ದು.
5. ಹರಾಜು ನಿರ್ವಹಣಾ ಅಧಿಕಾರಿಯ ನಿರ್ಣಯವೇ ಅಂತಿಮ ನಿರ್ಣಯ.
6. ಯಶಸ್ವಿ ಸವಾಲುದಾರರು ನೀಡಿರುವ ಸವಾಲನ್ನು ಸ್ಥಿರೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ ಇವರು ಹೊಂದಿರುತ್ತಾರೆ.

ಪಿ.ಆರ್. 74

ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ.

## ಪಶುಪಾಲನಾ ಮತ್ತು ಪಶುವೈದ್ಯಸೇವಾ ಇಲಾಖೆ

## ಉಪ ನಿರ್ದೇಶಕರವರ ಕಛೇರಿ, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳುರು-89

## ಹಲಸಿನ ಮರ ಮತ್ತು ಮಾವಿನ ಮರಗಳ ಹರಾಜು ಇಸ್ತಿಹಾರ್

**ಸಂಖ್ಯೆ: ಉನಿ:ಜಾಸಂಕ್ಷೇ:ಸಿ3:ಹುಮಾಫಹ:2004-05, ದಿನಾಂಕ: 4ನೇ ಫೆಬ್ರವರಿ 2005**

ಈ ಮೂಲಕ ಸಮಸ್ತ ಜನಗಳಿಗೆ ತಿಳಿಯಪಡಿಸುವುದೇನೆಂದರೆ ಈ ಕ್ಷೇತ್ರದ 2004-05ನೇ ಸಾಲಿನ ಹಲಸಿನ ಮರದ ಫಸಲು-15 ಮರಗಳಲ್ಲಿ, ಮಾವಿನ ಮರಗಳ ಫಸಲು-10 ಮರಗಳಲ್ಲಿ ಇವುಗಳನ್ನು ದಿನಾಂಕ: 23.3.2005ರ ಬುಧವಾರದಂದು ಬೆಳಿಗ್ಗೆ 11.00 ಗಂಟೆಯ ಮೇಲೆ ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟದ ಈ ಕಛೇರಿ ಆವರಣದಲ್ಲಿ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಬಹಿರಂಗವಾಗಿ ಹರಾಜು ಮಾಡಲಾಗುವುದು.

**ನಿಬಂಧನೆಗಳು:**

1) ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮೊದಲು ರೂಪಾಯಿ 2,000-00 (ರೂಪಾಯಿ ಎರಡು ಸಾವಿರ ಮಾತ್ರ) ಗಳನ್ನು ನಗದು ರೂಪದಲ್ಲಿ ಹರಾಜು ನಡೆಸುವ ಅಧಿಕಾರಿಗಳಲ್ಲಿ ಮುಂಗಡ ಠೇವಣಿ ಸಂದಾಯ ಮಾಡಿ ಹರಾಜಿನಲ್ಲಿ ಭಾಗವಹಿಸತಕ್ಕದ್ದು.
2) ಹರಾಜಿನಲ್ಲಿ ಯಶಸ್ವಿಯಾಗದವರ ಠೇವಣಿ ಹಣವನ್ನು ಹರಾಜು ಮುಗಿದ ನಂತರ ಹಿಂತಿರುಗಿಸಲಾಗುವುದು.
3) ಹರಾಜು ಮುಗಿದ ಕೂಡಲೇ ಯಶಸ್ವಿ ಹರಾಜುದಾರರು ಹರಾಜಿನ ಪೂರ್ಣ ಮೊಬಲಗನ್ನು ಪಾವತಿ ಮಾಡಿ ರಸೀದಿಯನ್ನು ಪಡೆಯತಕ್ಕದ್ದು. ತಪ್ಪಿದ್ದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಪುನಃ ಹರಾಜು ಮಾಡಲಾಗುವುದು. ಅದರಿಂದ ಆದ ನಷ್ಟದ ಮೊಬಲಗನ್ನು ಮೊದಲನೆಯ ಯಶಸ್ವಿ ಹರಾಜುದಾರರಿಂದಲೇ ರೆವಿನ್ಯೂ ಬಾಕಿಯೆಂದು ಪರಿಗಣಿಸಿ ವಸೂಲಿ ಮಾಡಲಾಗುವುದು. ಲಾಭವೇನಾದರೂ ಬಂದಲ್ಲಿ ಹರಾಜುದಾರರು ಅದಕ್ಕೆ ಅರ್ಹರಾಗುವುದಿಲ್ಲ.
4) ಹರಾಜನ್ನು ಉಪ ನಿರ್ದೇಶಕರು, ರಾಜ್ಯ ಕುಕ್ಕುಟ ಕ್ಷೇತ್ರ ಹೆಸರಘಟ್ಟ, ಬೆಂಗಳೂರು-89 ರವರಿಂದ ಹರಾಜು ನಡೆಸಲಾಗುವುದು. ಮತ್ತು ಹರಾಜಿನ ಯಾವ ಬಗೆಯ ಅಂತಿಮ ನಿರ್ಧಾರ ಹರಾಜು ನಡೆಸುವ ಅಧಿಕಾರಿಗಳಿಗೆ ಸೇರಿರುತ್ತದೆ.
5) ಹರಾಜಿನಲ್ಲಿ ಕೊಂಡ ಫಸಲನ್ನು ಎಲ್ಲ ವಿಧದಲ್ಲಿಯೂ ಕಾಪಾಡಿಕೊಂಡು ಹೋಗುವ ಜವಾಬ್ದಾರಿಯು ಫಸಲನ್ನು ಕೊಂಡವರಿಗೆ ಸೇರಿರುತ್ತದೆ. ಮತ್ತು ಈ ಬಗ್ಗೆ ಯಾವ ವಿಧವಾದ ದೂರುಗಳನ್ನು ಸ್ವೀಕರಿಸಲಾಗುವುದಿಲ್ಲ. ಹಾಗೂ ಈ ಫಸಲನ್ನು ದಿನಾಂಕ: 31.8.2005 ರವರೆಗೆ ಮಾತ್ರ ಅನುಭವಿಸುವುದಕ್ಕೆ ಅರ್ಹರಾಗಿರುತ್ತಾರೆ.
6) ಸರ್ಕಾರದ ಸ್ವತ್ತಿಗೆ ಯಾವ ವಿಧವಾದ ನಷ್ಟವೇನಾದರೂ ಉಂಟಾದರೆ ಹರಾಜುದಾರನೇ ತಮ್ಮ ಸ್ವಂತ ಖರ್ಚಿನಿಂದ ಸರಿಪಡಿಸಿಕೊಡಬೇಕು.

7) ಹರಾಜಿನಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಿ ನೌಕರರು ಭಾಗವಹಿಸುವಂತಿಲ್ಲ.
8) ಹರಾಜಿನ ಇತರೆ ಮಾಹಿತಿಗಳು ಬೇಕಾದ ಪಕ್ಷದಲ್ಲಿ ಈ ಕಛೇರಿಯ ಎಲ್ಲಾ ಕೆಲಸದ ದಿನಗಳಲ್ಲಿ ಕೇಳಿ ಪಡೆದುಕೊಳ್ಳಬಹುದು.

ಡಾ: ಎ.ಎಸ್. ರಂಗಸ್ವಾಮಿ

ಪಿ.ಆರ್. 76 ಉಪ ನಿರ್ದೇಶಕರು, ಜಾನುವಾರು ಸಂವರ್ಧನಾ ಕ್ಷೇತ್ರ, ಹೆಸರಘಟ್ಟ, ಬೆಂಗಳೂರು-89.

## PWD SHIMOGA DIVISION, SHIMOGA
## TENDER NOTIFICATION
## (Two Cover System)

**No. EE/PWD/SMG/D-3/Govt. Medical College/2004-05, dated: 25th January 2005**

Sealed tenders in duplicate in Two covers are invited from the Registered KPWD/CPWD/MES Contractors for the work noted below and will be received by the undersigned in this office upto 4.30 pm (IST) on the date noted below subject to the condition laid down in form No. PWG-65, KPWD code Vol-II and Karnataka Transparency in Public Procurement Ordinance-2000. The Tenders (Cover-1) will be opened by the undersigned at his office at 5.00 pm on the same day if possible. Otherwise, on the next working day.

The tender documents can be had from this office on application and payment noted in Col.No.5 (not refundable). The tender documents will be issued subject to the conditions there-of to the intending contractors on the date noted below between 10.00 am to 5.30 pm (except 1.30 to 2.15 pm) on all working days in this office.

| Sl. No. | Name of the Work | Approximate amount of Estimate put to tender in Rs. | E.M.D. to be paid in Rs. | Cost of tender documents (not Refund able) | Class of contractors eligible | Time for comple-tion of work |
|---|---|---|---|---|---|---|
| 1 | Construction of College Building, Boys & Girls Hostel Block and Doctor's quarters Block for Government Medical College @ Shimoga. | Rs.18,00,00,000 | Rs.18,00,000 | Rs.50,000 | Class-I | 18 Months including Rainy season |

| | |
|---|---|
| Last Date of Receipt of application upto 5.00 pm | 24.02.2005 |
| Issue of tender schedule upto 5.30 pm | 28.02.2005 |
| Last Date of Receipt of sealed tender forms from contractor upto 4.30 pm | 04.03.2005 |

**CONDITIONS:-**

**I. General**

1. The applicant should submit his application in person along with the original registration pass book. No representative will be entertained.
2. The competent authority reserves the right to reject any / all the tenders without assigning any reason there off duly considering his track record.
3. No materials will be supplied departmentally. Contractor has to procure all the materials required for the work from their own sources in accordance with relevant specification and Certificates.
4. Contractor should produce documents for having Centering Materials, Tippers, Lories, Vibraters, Excavators, Mechanical Concrete Mixer & all other equipments required for Building works duly attested by a district level officer or Notary otherwise the tender will not be accepted.
5. Tendering by joint ventures is not allowed.
6. Tender Box has been kept at Central Office Bangalore, Circle office Shimoga & Division office Shimoga.

**II. Technical Bid:- (Cover-1)**

1. The contractor must submit the following documents in duplicate with superscribing on the cover as Cover-I:- Technical Bid.
2. The E.M.D. should be paid in the form of DD/FDR drawn in favour of Executive Engineer, PWD Shimoga Division, Shimoga and enclosed along with Technical Bid.
3. Contractor should submit the copy of the relevant document (a certificate from competent Authority, not below the rank of Executive Engineer) for having completed satisfactorily one building work (including Civil works, water supply and sanitary and all electrical works) of similar nature costing not less than Rs.9.00 Crore in any two years during last 5 years i.e., 1999-2000 to 2003-04 along with the application form for eligibility verification.

4. The applicant should have achieved a financial turn over of at least Rs.27.00 Crores in any three years out of the past 5 years i.e., 1999-2000 to 2003-04. Certificate to that effect from Chartered Accountant to be furnished.
5. Solvency/line of credit certificate issued by any scheduled/Nationalised Bank for Rs.9.00 Crores to be produced.
6. Certificate towards availability of credit/over draft facilities from any scheduled Nationalised Bank for Rs.2.70 Crores to be produced. (in Form No-K)
7. Affidavit on stamp paper of Rs.100/- duly noterised to be executed. (in Form No-L).
8. Details of technical staff, the contractor is going to engage for the work and their experience including licensed electrical contractor to be enclosed.
9. All documents shall be attested by a district level officer or Notary otherwise the tender will not be accepted.

**III. Financial Bid: (Cover-2)**

1. The rates must be quoted in words and figures in duplicate in Schedule-B.
2. The contractor has to complete the form PWG-65 and PWG-66 by filling up all the details duly affixing his signature.
3. The sealed cover containing Schedule-B in duplicate shall be superscribed on the cover as Financial Bid-(Cover-2)
4. For any further details regarding the work & the conditions can be obtained from this office, during office hours.

PR - 75 Executive Engineer, PWD Shimoga Division, Shimoga.

**ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಂ.49, ಖನಿಜ ಭವನ, ಡಿ. ದೇವರಾಜ ಅರಸ್ ರಸ್ತೆ, ಬೆಂಗಳೂರು-01**

**ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಕೈಗಾರಿಕಾ ವಿಸ್ತರಣಾಧಿಕಾರಿ ಹುದ್ದೆಗಳಿಗೆ ಅರ್ಜಿ ಆಹ್ವಾನ**

**ಅಧಿಸೂಚನೆ ಸಂಖ್ಯೆ: ಆಡಳಿತ/ಸಿಬ್ಬಂದಿ/ಸ2/223/2004-05, ದಿನಾಂಕ: 5ನೇ ಫೆಬ್ರವರಿ 2005**

ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಕೈಗಾರಿಕಾ ವಿಸ್ತರಣಾಧಿಕಾರಿ ಹುದ್ದೆಗಳಿಗೆ ಅರ್ಜಿಯನ್ನು ಆಹ್ವಾನಿಸಲಾಗಿದೆ. ವಿವರಗಳು ಈ ಕೆಳಕಂಡಂತಿದೆ. 1. ಹುದ್ದೆಯ ಹೆಸರು: ಕೈಗಾರಿಕಾ ವಿಸ್ತರಣಾಧಿಕಾರಿ 2. ಹುದ್ದೆಗಳ ಸಂಖ್ಯೆ: 09 3. ವೇತನ ಶ್ರೇಣಿ ರೂ.4575-125-5700-150-7200-200-8400 4. ವಿದ್ಯಾರ್ಹತೆ: ವಿಜ್ಞಾನದಲ್ಲಿ ಪದವಿ, ಭೌತಶಾಸ್ತ್ರ ಮತ್ತು ರಸಾಯನಶಾಸ್ತ್ರ ಮತ್ತು ಗಣಿತ ವಿಷಯಗಳಲ್ಲಿ ವಿಜ್ಞಾನ ಪದವಿ ಪಡೆದವರಿಗೆ ಆದ್ಯತೆ ಅಥವಾ ವಾಣಿಜ್ಯ ವಿಷಯದಲ್ಲಿ ಪದವಿ ಅಥವಾ ಯಾವುದೇ ಇಂಜಿನೀಯರಿಂಗ್‌ನಲ್ಲಿ ಡಿಪ್ಲೋಮೊ (ಸಿವಿಲ್ ಇಂಜಿನೀಯರಿಂಗ್ ಹೊರತುಪಡಿಸಿ) 5. ವಯೋಮಿತಿ: ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಲ್ಲಿ ಇದ್ದಂತೆ ಕನಿಷ್ಟ 18 ವರ್ಷಗಳು ಗರಿಷ್ಟ 40 ವರ್ಷಗಳು 6. ಹುದ್ದೆಗಳ ವರ್ಗೀಕರಣ: ಪರಿಶಿಷ್ಟ ಜಾತಿಯ ಸಾಮಾನ್ಯ ಅಭ್ಯರ್ಥಿಗಳು-03 ಹುದ್ದೆಗಳು, ಪರಿಶಿಷ್ಟ ಜಾತಿಯ ಮಹಿಳಾ ಅಭ್ಯರ್ಥಿಗಳು-03 ಹುದ್ದೆಗಳು, ಪರಿಶಿಷ್ಟ ಜಾತಿಯ ಗ್ರಾಮೀಣ ಅಭ್ಯರ್ಥಿಗಳು-03 ಹುದ್ದೆಗಳು 7. ಹುದ್ದೆಗಳ ಕಾಲಾವಧಿ: ಖಾಯಂ ನಿವೃತ್ತಿ ವೇತನ ಸಹಿತ, ಅರ್ಹತಾಪೂರ್ವ ಅವಧಿ 2 ವರ್ಷಗಳು 8. ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 10.03.2005 9. ಅರ್ಜಿಯನ್ನು ಸಲ್ಲಿಸಬೇಕಾಗಿರುವ ವಿಳಾಸ: ಅಧಿಕ ನಿರ್ದೇಶಕರು (ಆಡಳಿತ), ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯ, ನಂ.49, ಡಿ. ದೇವರಾಜ ಅರಸ್ ರಸ್ತೆ, ಬೆಂಗಳೂರು-560 001.

ಈ ಕೆಳಕಂಡ ವಿವರಗಳನ್ನೊಳಗೊಂಡ ಬೆರಳಚ್ಚುಮಾಡಿದ ಅರ್ಜಿಯನ್ನು ಪಾಸ್‌ಪೋರ್ಟ್ ಅಳತೆಯ ಭಾವ ಚಿತ್ರದೊಂದಿಗೆ ಸಲ್ಲಿಸತಕ್ಕದ್ದು. ಅರ್ಜಿಯೊಂದಿಗೆ ಪ್ರಮಾಣಪತ್ರಗಳ ದೃಢೀಕೃತ ನಕಲುಗಳನ್ನು ಕಡ್ಡಾಯವಾಗಿ ಸಲ್ಲಿಸತಕ್ಕದ್ದು.

1. ಅಭ್ಯರ್ಥಿಯ ಹೆಸರು, 2. ತಂದೆ / ಗಂಡನ ಹೆಸರು, 3. ಜನ್ಮ ದಿನಾಂಕ (ಜನ್ಮ ದಿನಾಂಕವನ್ನು ನಮೂದಿಸಲಾದ ಎಸ್.ಎಸ್.ಎಲ್.ಸಿ/ ತತ್ಸಮಾನ ಪರೀಕ್ಷೆಯ ಅಂಕಪಟ್ಟಿ ಲಗತ್ತಿಸಬೇಕು), 4. ಖಾಯಂ ವಿಳಾಸ, 5. ವಿದ್ಯಾರ್ಹತೆ ವಿವರ (ಪದವಿ / ಡಿಪ್ಲೊಮೋ ಪರೀಕ್ಷೆಯ ಪ್ರತಿ ವರ್ಷದ ಅಂಕಪಟ್ಟಿಯ ದೃಢೀಕರಣ ಪ್ರತಿ ಲಗತ್ತಿಸಬೇಕು), 6. ನಮೂನೆ-"ಡಿ" ರಲ್ಲಿ ತಹಶೀಲ್ದಾರ್‌ರವರಿಂದ ಪಡೆದ ಜಾತಿ ಪ್ರಮಾಣ ಪತ್ರ ಲಗತ್ತಿಸಬೇಕು. 7. ಪ್ರವರ್ಗ ವಿವರ: ಸಾಮಾನ್ಯ ಅಭ್ಯರ್ಥಿ / ಮಹಿಳಾ ಅಭ್ಯರ್ಥಿ / ಗ್ರಾಮೀಣ ಅಭ್ಯರ್ಥಿ (ಗ್ರಾಮೀಣ ಅಭ್ಯರ್ಥಿಗಳಾದಲ್ಲಿ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶಗಳಲ್ಲಿ ವಿದ್ಯಾಭ್ಯಾಸ ಮಾಡಿದ ಬಗ್ಗೆ ದಾಖಲಾತಿಗಳನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮಾಡಲ್ಪಟ್ಟ ಪ್ರಮಾಣಪತ್ರವನ್ನು ಲಗತ್ತಿಸುವುದು).

ಅಪೂರ್ಣವಾದ ಅರ್ಜಿಗಳು ಹಾಗೂ ದಾಖಲಾತಿಗಳನ್ನು ನೀಡದ ಅರ್ಜಿಗಳನ್ನು ಪರಿಗಣಿಸುವುದಿಲ್ಲ. ನಿಗದಿತ ಕೊನೆಯ ದಿನಾಂಕದ ಅವಧಿ ಮೀರಿದ ನಂತರ ಸ್ವೀಕೃತಿಯಾಗುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಪಿ.ಆರ್. 79 ಅಧಿಕ ನಿರ್ದೇಶಕರು (ಆಡಳಿತ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು.

**FORM - IV**

**(See Rule 12)**

**NOTICE**

It is hereby notified that the undersigned has changed his name from **BHEEMAPPA BASAPPA MADAR** to **BHEEMAPPA BASAPPA GUDIMANI.**

PD. 14 **BHEEMAPPA BASAPPA GUDIMANI.**